# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ. ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 624 |
| ಉತ್ತರ ದಿನಾಂಕ | : | 17.12.2021 |

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದ ಗ್ರಾಮ ಪಂಚಾಯತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಸ್ಥರದ ಸಿಬ್ಬಂದಿಗಳು ಯಾರು ಯಾರು; ಇವರಿಗೆ ಸರ್ಕಾರವು ನಿಗದಿಪಡಿಸಿರುವ ವೇತನವೆಷ್ಟು; ಇವರ ನೇಮಕಾತಿಯ ವಿಧಿ ವಿಧಾನಗಳಾವುವು; (ವಿವರವಾದ ಮಾಹಿತಿ ನೀಡುವುದು)</td><td>ರಾಜ್ಯದ ಗ್ರಾಮ ಪಂಚಾಯತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಸ್ಥರದ ಸಿಬ್ಬಂದಿಗಳು ಮತ್ತು ಸರ್ಕಾರವು ನಿಗಧಿಪಡಿಸಿರುವ ಕನಿಷ್ಠ ವೇತನ ವಿವರ ಈ ಕೆಳಕಂಡಂತಿದೆ.
<table>
<tr><th>ಕ್ರ. ಸಂ</th><th>ಸಿಬ್ಬಂದಿ ಪದನಾಮ</th><th>ಪ್ರಸ್ತುತ ಕಾರ್ಮಿಕ ಕಾಯ್ದೆಯನ್ವಯನೀಡಲಾಗುತ್ತಿರುವ ಕನಿಷ್ಠ ವೇತನ ಮತ್ತು ತುಟ್ಟಿಭತ್ಯೆ ಮಾಸಿಕವಾಗಿ (ರೂ.ಗಳಲ್ಲಿ)</th></tr>
<tr><td>1</td><td>ಕರ ವಸೂಲಿಗಾರ</td><td>14543</td></tr>
<tr><td>2</td><td>ಕ್ಲರ್ಕ್, ಕ್ಲರ್ಕ್ ಕಂ ಡಾಟಾ ಎಂಟ್ರಿ ಆಪರೇಟರ್</td><td>14543</td></tr>
<tr><td>3</td><td>ವಾಟರ್ಆಪರೇಟರ್</td><td>12709</td></tr>
<tr><td>4</td><td>ಅಟೆಂಡೆಂಟ್</td><td>12131</td></tr>
<tr><td>5</td><td>ಕ್ಲೀನರ್</td><td>14991</td></tr>
</table>
ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 886 ಗ್ರಾಪಂಕಾ 2016, ದಿನಾಂಕ:29.09.2020 ರಲ್ಲಿ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ಗ್ರಾಮ ಪಂಚಾಯತಿ ಸಿಬ್ಬಂದಿ ಸ್ವರೂಪ, ವೇತನ ಶ್ರೇಣಿಗಳು, ನೇಮಕಾತಿ ವಿಧಾನ ಮತ್ತು ಇತರೆ ಸೇವಾ ಷರತ್ತುಗಳು) ನಿಯಮಗಳು, 2020 ಅನ್ನು ರೂಪಿಸಲಾಗಿದ್ದು, ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 112 ಮತ್ತು 113 ರಂತೆ ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವರ್ಗದ ಸ್ವರೂಪ, ನೇಮಕಾತಿ ವಿಧಾನ ಮತ್ತು ಇತರೆ ಸೇವಾ ಷರತ್ತುಗಳನ್ನು ನಿರ್ದಿಷ್ಟಪಡಿಸಲಾಗಿದೆ.</td></tr>
<tr><td>ಆ)</td><td>ಜಲ ಜೀವನ್ ಮಿಷನ್ (JJM) ಯೋಜನೆಯಡಿ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಎಷ್ಟು ಹಣ ಬಿಡುಗಡೆ ಮಾಡಿದೆ; ಈ ಹಣವನ್ನು ಯಾವ ಯಾವ ಕಾಮಗಾರಿಗಳಿಗಾಗಿ ಉಪಯೋಗಿಸಲಾಗುವುದು;</td><td>ಜಲ ಜೀವನ್ ಮಿಷನ್ (JJM) ಯೋಜನೆಯಡಿ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಪ್ರಸ್ತುತ ಸಾಲಿನಲ್ಲಿ ರೂ.1252.20 ಕೋಟಿಗಳನ್ನು ಬಿಡುಗಡೆ ಮಾಡಿದೆ. ಈ ಹಣವನ್ನು ಗ್ರಾಮೀಣ ಪ್ರದೇಶಗಳಲ್ಲಿನ ಜಲ ಜೀವನ್ ಮಿಷನ್</td></tr>
</table>

| | | |
|---|---|---|
| | ಹಾಲಿ ಲಭ್ಯವಿರುವ ಹಣವೆಷ್ಟು; (ವಿವರವಾದ ಮಾಹಿತಿ ನೀಡುವುದು) | ಯೋಜನೆಯಡಿಯ ಕುಡಿಯುವ ನೀರಿನ ಕಾಮಗಾರಿಗಳಾದ ಮನೆಗಳಿಗೆ ಕಾರ್ಯಾತ್ಮಕ ನಳ ಸಂಪರ್ಕ, ಅದಕ್ಕೆ ಸಂಬಂದಿಸಿದ ಬಹುಗ್ರಾಮ ಕುಡಿಯುವ ನೀರು ಯೋಜನೆ, ಬೆಂಬಲ ಚಟುವಟಿಕೆಗಳು, ನೀರಿನ ಗುಣಮಟ್ಟ ಮತ್ತು ಪರಿವೀಕ್ಷಣೆ ಚಟುವಟಿಕೆಗಳಿಗೆ ಉಪಯೋಗಿಸಲಾಗುವುದು; ಹಾಲಿ (ನವೆಂಬರ್ ಅಂತ್ಯಕ್ಕೆ) ಕೇಂದ್ರದ ಪಾಲಿನ ರೂ.823.95 ಕೋಟಿಗಳ ಅನುದಾನ ಲಭ್ಯವಿರುತ್ತದೆ. |
| ಇ) | **ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗ್ರಾಮಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕವನ್ನು ಸ್ಥಾಪನೆ ಮಾಡುವ ಕಾರ್ಯವು ಯಾವಾಗ ಪ್ರಾರಂಭವಾಯಿತು; ಒಂದು ಘಟಕಕ್ಕೆ ತಗಲುವ ವೆಚ್ಚ ಎಷ್ಟು; (ವಿವರವಾದ ಮಾಹಿತಿ ನೀಡುವುದು)** | **ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗ್ರಾಮಗಳಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ವತಿಯಿಂದ ಗ್ರಾಮೀಣ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯ ಇಲಾಖೆ ಉಸ್ತುವಾರಿಯಲ್ಲಿ ವಿವಿಧ ಅನುದಾನಗಳಡಿ** 2011-12 **ನೇ ಸಾಲಿನಿಂದ ಶುದ್ಧ ಕುಡಿಯುವ ನೀರಿನ ಘಟಕಗಳ ಸ್ಥಾಪನೆ ಮಾಡುವ ಕಾರ್ಯವು ಪ್ರಾರಂಭಿಸಲಾಗಿದೆ. ಒಂದು** 1000 LPH **ಘಟಕಕ್ಕೆ ತಗಲುವ ಅಂದಾಜು ಮೊತ್ತ ರೂ.**8.50 **ಲಕ್ಷಗಳು. ವಿವರವಾದ ಮಾಹಿತಿಯು ಈ ಕೆಳಗಿನಂತಿದೆ:**<br><br>ಕ್ರ ಸಂ \| ವಿವರಣೆ \| ಮೊತ್ತ ರೂ. ಲಕ್ಷಗಳು<br>ಅ) \| ಸಿವಿಲ್ ಮತ್ತು ವಿದ್ಯುತ್ ಕಾಮಗಾರಿಗಳು \| 4.58<br>D) \| ಶುದ್ಧ ಕುಡಿಯುವ ನೀರಿನ ಘಟಕದಲ್ಲಿ ಶುದ್ಧೀಕರಿಸಿವುದಕ್ಕೆ ಬೇಕಾದ ಯಂತ್ರ ಸಾಮಗ್ರಿಗಳ ಮೊತ್ತ \| 3.92 |
| ಈ | **ಈ ಘಟಕಗಳ ನಿರ್ವಹಣೆಯನ್ನು ಯಾರಿಗೆ ವಹಿಸಲಾಗಿದೆ; ಘಟಕಗಳ ನಿರ್ವಹಣೆಯು ಸರಿಯಾಗಿ ನಡೆಯುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ;** | ಘಟಕಗಳ ಸ್ಥಾಪನೆಗೆ ಟೆಂಡರ್ ಕರೆದು ಗುತ್ತಿಗೆದಾರರೊಂದಿಗೆ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆ ಸೇರಿಸಿ ಒಡಂಬಡಿಕೆ ಮಾಡಿಕೊಳ್ಳಲಾಗುತ್ತಿದೆ. ಕಾರ್ಯಾಚರಣೆ ಮತ್ತು ನಿರ್ವಹಣೆ ಅವಧಿ ಮುಗಿದ ನಂತರ ಪುನಃ ಟೆಂಡರ್ ಕರೆದು ಸೂಕ್ತ ಕ್ರಮ ವಹಿಸಲಾಗುತ್ತದೆ.<br>ಘಟಕಗಳ ನಿರ್ವಹಣೆಯು ಸರಿಯಾಗಿ ನಡೆಯುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ ಹಾಗೂ ಘಟಕಗಳನ್ನು ಸುಸ್ಥಿತಿಯಲ್ಲಿಡಲು ಈ ಕೆಳಗಿನಂತೆ ಕ್ರಮ ವಹಿಸಲಾಗುತ್ತಿದೆ.<br>• Defect Liability Period ಮುಗಿಯುವುದರೊಳಗೆ ಕಾರ್ಯನಿರ್ವಹಿಸದೇ ಇದ್ದಲ್ಲಿ, ಅಂತಹ ಘಟಕಗಳನ್ನು ಸ್ಥಾಪಿಸಿದ ಏಜೆನ್ಸಿರವರಿಗೆ ಕರಾರಿನಂತೆ ನೋಟೀಸ್‌ಗಳನ್ನು ನೀಡಿ ಘಟಕ ದುರಸ್ತಿ ಮಾಡಿಸಲಾಗುತ್ತಿದೆ ಮತ್ತು ವಿಫಲವಾದ ಗುತ್ತಿಗೆದಾರರ ಕರಾರನ್ನು Rescind ಮಾಡಲು |

| | | |
|---|---|---|
| | | **ಕ್ರಮವಹಿಸಲಾಗುತ್ತಿದೆ. ಹಾಗೂ ಸದರಿ ಘಟಕಗಳನ್ನು ನಿಯಮಾನುಸಾರ ಇಲಾಖಾ ವತಿಯಿಂದ ಸರಿಪಡಿಸಿ ಕಾರ್ಯನಿರ್ವಹಿಸುವಂತೆ ಕ್ರಮಜರುಗಿಸಲಾಗುತ್ತಿದೆ. ವಾರ್ಷಿಕ ಕಾರ್ಯಾಚರಣೆ ಮತ್ತು ನಿರ್ವಹಣೆ ನಿರ್ವಹಿಸುತ್ತಿರುವ ಗುತ್ತಿಗೆದಾರರು ಘಟಕಗಳನ್ನು ಸುಸ್ಥಿತಿಯಲ್ಲಿಡಲು ವೈಫಲ್ಯರಾದಲ್ಲಿ ನಿಯಮಾನುಸಾರ ನೋಟೀಸ್‌ಗಳನ್ನು ನೀಡಿ ಗುತ್ತಿಗೆದಾರರ ಕಾಸ್ಟ್ ಅಂಡ್ ರಿಸ್ಕ್ ಆಧಾರದಲ್ಲಿ ಗುತ್ತಿಗೆ ರದ್ದುಪಡಿಸಲಾಗಿದೆ.**<br>• ಗ್ರಾಮ ಪಂಚಾಯಿತಿಗಳಿಗೆ ನಿರ್ವಹಣೆಗಾಗಿ ವಹಿಸಲಾದ ಘಟಕಗಳನ್ನು ಸುಸ್ಥಿತಿಯಲ್ಲಿಡಲು ಮಾಹೆಯಾನ ಪ್ರತಿ ಘಟಕಕ್ಕೆ ಇಲಾಖೆಯಿಂದ ರೂ.3000.00 ಗಳ ಅನುದಾನ ಒದಗಿಸಲಾಗುತ್ತಿದೆ ಹಾಗೂ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿನ ಇತರೆ ಅನುದಾನಗಳನ್ನು ಬಳಸಿ ಘಟಕಗಳನ್ನು ಸುಸ್ಥಿತಿಯಲ್ಲಿಡಲು ಕಾಲಕಾಲಕ್ಕೆ ಸೂಚನೆಗಳನ್ನು ಸಹ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನೀಡಲಾಗುತ್ತಿದೆ. |
| ಉ) | **ಬಾಕಿ ಇರುವ ಜನವಸತಿ ಗ್ರಾಮಗಳಿಗೆ ಶುದ್ಧ ಕುಡಿಯುವ ನೀರಿನ ಘಟಕವನ್ನು ಯಾವಾಗ ನಿರ್ಮಾಣ ಮಾಡಲಾಗುವುದು?** | **ಗ್ರಾ.ಕು.ನೀ&ನೈ ಇಲಾಖೆಗೆ ಸ್ವೀಕೃತವಾದ ಪ್ರಸ್ತಾವನೆಯಲ್ಲಿ ಕುಡಿಯುವ ನೀರು ಕಲುಷಿತವೆಂದು ಕಂಡು ಬಂದಲ್ಲಿ ಜಿಲ್ಲಾ ಪರೀಕ್ಷಾ ಪ್ರಯೋಗಾಲಯ, NABL ಪರೀಕ್ಷಾ ಪ್ರಯೋಗಾಲಯ ಮತ್ತು KSPCB ಪರೀಕ್ಷಾ ಪ್ರಯೋಗಾಲಯಗಳ ವರದಿಯೊಂದಿಗೆ ನಿಗಧಿತ ಚೆಕ್‌ಲಿಸ್ಟ್ ಸಲ್ಲಿಸಿದ ನಂತರ ಶುದ್ಧ ಕುಡಿಯುವ ನೀರಿನ ಘಟಕದ ಅವಶ್ಯಕತೆ ಇದ್ದಲ್ಲಿ ಮಾತ್ರ ಪ್ರಸ್ತಾವನೆಯನ್ನು ಅನುಮೋದಿಸಲಾಗುವುದು.** |

ಸಂ:ಗ್ರಾಕುನೀ&ನೈಇ 318 ಗ್ರಾನೀಸ(4)2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು